ಖಾಸಗಿ ಶಾಲೆಗಳು ಮಕ್ಕಳ ಉತ್ತಮ ಕಲಿಕಾ ಫಲಿತಾಂಶದ ಭರವಸೆ ಕೊಡುತ್ತವೆಯೇ ?

ಡಿ. ಡಿ. ಕರೋಪಾಡಿ

ಅನು: ವಿನಯಾ ಜೆ ವಿಟ್ಠಲ್

ಖಾಸಗಿ ಹಾಗೂ ಸರ್ಕಾರಿ ಶಾಲೆಗಳ ನಡುವಿನ ತುಲನೆಯ ಚರ್ಚೆ ಅತ್ಯಂತ ಹಳೆಯದು. ಇತ್ತೀಚೆಗೆ, ಹಲವು ದೇಶಗಳಲ್ಲಿ ನಡೆಯುತ್ತಿರುವ ಸಂಶೋಧನೆಗಳ ಪ್ರಕಾರ , ಪ್ರಚಲಿತದಲ್ಲಿರುವ ಗ್ರಹಿಕೆಯ ವಿರುದ್ಧವಾಗಿ, ಸರ್ಕಾರಿ ಶಾಲೆಗಳಿಗಿಂತಲೂ ಖಾಸಗಿ ಶಾಲೆಗಳು ಕಲಿಕಾ ಫಲಿತಾಂಶಕ್ಕೆ ಸಂಬಂಧಿಸಿದಂತೆ ಹೆಚ್ಚಿನದೇನನ್ನೂ ಕೊಡುವುದಿಲ್ಲ ಎಂಬುದನ್ನು ಸೂಚಿಸುತ್ತಿವೆ. ಇತ್ತೀಚಿನ ಕೆಲವು ಅಧ್ಯಯನಗಳ ಫಲಿತಾಂಶಗಳ ಆಧಾರದ ಮೇಲೆ ಈ ಲೇಖನವು ವಿಷಯವನ್ನು ಚರ್ಚಿಸುತ್ತದೆ.

## ಪೀಠಿಕೆ

ಭಾರತದಲ್ಲಿ ನಿಜವಾಗಿಯೂ ಒಳ್ಳೆಯ ಖಾಸಗಿ ಶಾಲೆಗಳಿವೆಯೆ ? ಈ ಲೇಖನದ ಓದುಗರಲ್ಲಿ ಹಲವರಿಗೆ ಮನಸ್ಸಿನಲ್ಲಿ ಈ ಪ್ರಶ್ನೆ ಎಂದಾದರೂ ಹಾದು ಹೋಗಿರಬಹುದಾದ ಸಾಧ್ಯತೆ ಇದೆ ಹಾಗೂ ಇದಕ್ಕೆ ನಿರ್ಣಾಯಕವಾದ ಉತ್ತರ ದಕ್ಕಿರಬಹುದು ಅಥವಾ ಇರದಿರಬಹುದು. ಏಕೆಂದರೆ ಈ ಪ್ರಶ್ನೆಗೆ ಅಷ್ಟು ಸುಲಭದಲ್ಲಿ ಉತ್ತರಗಳು ಸಿಗುವುದಿಲ್ಲ.

ಮೊದಲಿಗೆ, ಇಲ್ಲಿ ನಾನಾ ವಿಧದ ಖಾಸಗಿ ಶಾಲೆಗಳು ಇವೆ. ಇವುಗಳಲ್ಲಿ, ನಗರಗಳಲ್ಲಿನ ಉನ್ನತ ಸ್ತರದ ಖಾಸಗಿ ಶಾಲೆಗಳು, ಹೆಚ್ಚು ಶುಲ್ಕದ ವಸತಿ ಶಾಲೆಗಳು, ' ಪರ್ಯಾಯ ಶಾಲೆಗಳು', ಮಧ್ಯಮ ವರ್ಗದವರಿಗೆ ಎಟುಕುವ ಖಾಸಗಿ ಶಾಲೆಗಳು , ಕಡಿಮೆ ಶುಲ್ಕವನ್ನು ಪಡೆಯುವ ಖಾಸಗಿ ಶಾಲೆಗಳು ( ಹೆಚ್ಚಾಗಿ ಗ್ರಾಮೀಣ ಪ್ರದೇಶಗಳಲ್ಲಿ) ಮುಂತಾದವು ಇವೆ. ಹಾಗಾಗಿ ಎಲ್ಲವನ್ನೂ ಒಂದೇ ಗುಂಪಿಗೆ ಸೇರಿಸುವುದು ತಪ್ಪಾಗುತ್ತದೆ. ವಾಸ್ತವದಲ್ಲಿ ಒಳ್ಳೆಯ ಶಾಲೆ ಹಾಗೂ ಅದನ್ನು ಅಳೆಯುವ ಮಾನದಂಡಗಳ ಬಗ್ಗೆ ಸಹಮತ ಬಹಳ ಕಡಿಮೆ ಇರುವುದರಿಂದ ಈ ಪ್ರಶ್ನೆಗೆ ಉತ್ತರವು ಇನ್ನೂ ಸಂಕೀರ್ಣವಾಗುತ್ತ ಹೋಗುತ್ತದೆ. ಖಚಿತವಾಗಿ ಹೇಳಬೇಕಂದರೆ, ಶಿಕ್ಷಣ ಎಂಬುದು ಒಂದು ಸಂಕೀರ್ಣ ವಿಷಯ. ಇದು ಶಾಲೆಯಲ್ಲಿನ ಹಲವಾರು ಆಂತರಿಕ ಅಂಶಗಳಾದ ಪಠ್ಯಕ್ರಮ, ಪಠ್ಯಪುಸ್ತಕಗಳು , ಶಿಕ್ಷಣಶಾಸ್ತ್ರ, ಶಿಕ್ಷಕರ ಗಣತಿ, ಶಿಕ್ಷಕರ ಸಿದ್ಧತೆ, ವಿದ್ಯಾರ್ಥಿ-ಶಿಕ್ಷಕ ಅನುಪಾತ ಹಾಗೂ ಇನ್ನೂ ಕೆಲವು ಹಾಗೂ ಶಾಲೆಯ ಹೊರಗಿನ ಅಂಶಗಳಾದ ಮನೆಯ ವಾತಾವರಣ, ಸಾಮಾಜಿಕ-ಆರ್ಥಿಕ

ಹಿನ್ನೆಲೆ, ಶಿಕ್ಷಣಕ್ಕೆ  ಬೆಂಬಲ ನೀಡುವ ವ್ಯವಸ್ಥೆಗಳ ದೊರಕುವಿಕೆ ಮುಂತಾದವುಗಳಿಂದ ಪ್ರಭಾವಿತವಾಗಿರುತ್ತದೆ. ಕಲಿಕಾ ಫಲಿತಾಂಶ ಹಲವಾರು ಮಾನದಂಡಗಳಲ್ಲಿ ಒಂದು ಅಂಶವಷ್ಟೇ ಆದರೂ, ಒಂದು ಮುಖ್ಯವಾದ ಹಾಗೂ ತುಲನಾತ್ಮಕವಾಗಿ ಸುಲಭವಾಗಿ ಅಳೆಯಬಹುದಾದ ಹಾಗೂ ವ್ಯಾಪಕವಾಗಿ ಅರ್ಥವಾಗುವ ಅಂಶ. ಕೆಲವು ಸಂಶೋಧನಾ ಅಧ್ಯಯನಗಳು, ಕಲಿಕಾ ಫಲಿತಾಂಶಗಳನ್ನು ಆಧರಿಸಿ ನಿರ್ಣಯಗಳನ್ನು ತೆಗೆದುಕೊಳ್ಳುವ ಅವರ ಕ್ರಮ ಹಾಗೂ ಅದರ ಫಲಾಫಲಗಳ ಬಗ್ಗೆ ನಾನು ಈ ಲೇಖನದಲ್ಲಿ ಚರ್ಚಿಸುತ್ತೇನೆ. ಇದರಿಂದ ಸ್ಪಷ್ಟವಾದ ಉತ್ತರಗಳು ಸಿಗುತ್ತವೆ ಎಂದು ಹೇಳುವ ಉದ್ದೇಶ ನನ್ನದಲ್ಲವಾದರೂ, ಕ್ಲಿಷ್ಟವಾದ ವಿಷಯದ ಮೇಲೆ ಬೆಳಕನ್ನು ಚೆಲ್ಲುತ್ತದೆ ಎಂಬ ನಿರೀಕ್ಷೆಯಿದೆ.

ಸರ್ಕಾರಿ ಶಾಲೆಗಳು ಹಾಗೂ ಖಾಸಗಿ ಶಾಲೆಗಳ ನಡುವಿನ ಚರ್ಚೆ ಹೊಸದಲ್ಲ. ಈ ಶತಮಾನದ ಆರಂಭದಲ್ಲಿ ರೈಟ್ ಟು ಎಜುಕೇಷನ್ ಮಸೂದೆಯು ಚರ್ಚೆಯ ವಿಷಯವಾದಾಗ ಇದು ಇನ್ನೂ ತೀವ್ರವಾಗಿದೆಯಷ್ಟೇ. ಇತ್ತೀಚೆಗೆ  ಖಾಸಗಿ ಶಾಲೆಗಳ ಪರವಿರುವವರು ಹಾಗೂ ವಿರೋಧಿಗಳ ನಡುವಿನ ಕಂದರ ಹೆಚ್ಚಾಗಿದೆ. ವಿರೋಧಿಗಳ ಪ್ರಕಾರ ಶಾಲೆಗಳು ಆರ್ಥಿಕ ಶ್ರೇಣೀಕರಣಕ್ಕೆ ಎಡೆಮಾಡಿಕೊಡುವುದರಿಂದ ಖಾಸಗಿ ಶಾಲೆಗಳು ಹಾನಿಕಾರಕ. ವಾಸ್ತವದಲ್ಲಿ ಖಾಸಗಿ ಶಾಲೆಗಳಿಗೆ ಮಕ್ಕಳ ಸೇರ್ಪಡೆ ಸರ್ಕಾರೀ ಶಾಲೆಗಳ ದುರ್ಗತಿಗೆ ಕಾರಣವಾಗುತ್ತದೆ ಏಕೆಂದರೆ ಬಹುಶಃ 'ಉತ್ತಮ ಮಕ್ಕಳು' ಅಲ್ಲಿಗೆ ವಲಸೆ ಹೋಗುತ್ತಾರೆ. ಖಾಸಗಿ ಶಾಲೆಗಳ ಶಿಕ್ಷಕರು ಕಡಿಮೆ ವೇತನವನ್ನು ಪಡೆಯುತ್ತಾರೆ ಮತ್ತು ಕಳಪೆ ಗುಣಮಟ್ಟವನ್ನು ಹೊಂದಿರುತ್ತಾರೆ ಎಂಬ ವಾಸ್ತವವನ್ನು ಸೂಚಿಸುತ್ತಾರೆ. ಖಾಸಗಿ ಶಾಲೆಗಳಿಂದಾಗಿ ಶಿಕ್ಷಣವು ಅತಿಯಾದ ವ್ಯಾಪಾರೀಕರಣಗೊಳ್ಳುತ್ತದೆ ಹಾಗೂ ಕೊನೆಯಲ್ಲಿ ಬಡವರು ಹಾಗೂ ಸಮಾಜದ ಅಂಚಿನಲ್ಲಿರುವ ಜನರಿಂದ ದೂರವಾಗುತ್ತದೆ ಎಂದು ಭಾವಿಸುತ್ತಾರೆ.

ಮತ್ತೊಂದೆಡೆ, ಗ್ರಾಮೀಣ ಪ್ರದೇಶಗಳಲ್ಲೂ ಹೆಚ್ಚುತ್ತಿರುವ ಖಾಸಗೀ ಶಾಲೆಗಳ ದಾಖಲಾತಿಯು, ಜನರು ಸರ್ಕಾರೀ ಶಾಲೆಗಳ ವಿರುದ್ಧವೆಂಬುದನ್ನು ತೋರುತ್ತದೆ ಎಂದು ಬೆಂಬಲಿಗರು ಪ್ರತಿಪಾದಿಸುತ್ತಾರೆ. ಅದೂ ಉಚಿತ ಸರ್ಕಾರೀ ಶಾಲೆಯಿಂದ ಶುಲ್ಕ ನೀಡಬೇಕಾದ ಖಾಸಗೀ ಶಾಲೆಗೆ ಬೇರೆ ವಿಷಯಗಳಲ್ಲಿ ಕಡಿಮೆ ಮಾಡಿಕೊಂಡಾದರೂ  ಸೇರಿಸುತ್ತಿರುವುದರಿಂದ. ಜನರು ತಮಗೆ ಉಚಿತವಾಗಿ ದೊರಕುತ್ತಿರುವುದನ್ನೂ ತಿರಸ್ಕರಿಸುತ್ತಿದ್ದಾರೆಂದರೆ ಅದರಲ್ಲೇನೋ ಲೋಪವಿದೆ ಎಂಬುದು ಇತರರ ನಂಬಿಕೆ. ಖಾಸಗಿ ಶಾಲೆಗಳು ಮಕ್ಕಳಿಗೆ ಉತ್ತಮ ಕಲಿಕೆಯನ್ನು ಒದಗಿಸುತ್ತಾರೆ ಹಾಗೂ ಹೆಚ್ಚು ಜವಾಬ್ದಾರಿಯುತವಾಗಿ ಹಾಗೂ

ಸ್ಪಂದನೆಯೊಂದಿಗೆ ಪೋಷಕೊರಡನೆ ವ್ಯವಹರಿಸುತ್ತಾರೆ ಎಂದು ವಾದಿಸುತ್ತಾರೆ.

## ಗ್ರಾಮೀಣ ಶಾಲೆಗಳು

ಮೊದಲಿಗೆ ನಮ್ಮ ದೇಶದ ಮೂರನೇ ಎರಡು ಭಾಗದಷ್ಟು ಮಕ್ಕಳು ಕಲಿಯುತ್ತಿರುವ ಗ್ರಾಮೀಣ ಶಾಲೆಗಳ (ಕಡಿಮೆ ಶುಲ್ಕ ವಿಧಿಸುವ ಖಾಸಗಿ ಶಾಲೆಗಳು ಹೆಚ್ಚಾಗಿರುವ ) ಬಗ್ಗೆ ಗಮನ ಹರಿಸೋಣ. ಈ ಶತಮಾನದ ಆದಿಯಲ್ಲಿ, ಭಾರತದಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ದಾಖಲಾತಿ ಪ್ರಮಾಣ ಒಟ್ಟಾರೆ ಹೆಚ್ಚಾದಂತೆಯೇ ದೊಡ್ಡ ಪ್ರಮಾಣದಲ್ಲಿ ಮತ್ತು ಒಂದೇ ಸಮ ಖಾಸಗಿ ಶಾಲೆಗಳಲ್ಲಿಯೂ ದಾಖಲಾತಿ ಹೆಚ್ಚಾಗಿದೆ. ನಗರ ಪ್ರದೇಶಗಳಲ್ಲಿ ಯಾವಾಗಲೂ ಈ ಅಂಕಿಗಳು ಹೆಚ್ಚಿದ್ದರೂ , ಇತ್ತೀಚಿನ Annual Status of Education Report (ASER Rural) 2014ರ ಅಂದಾಜು ಸೂಚಿಸುತ್ತಿರುವುದೇನೆಂದರೆ, ಗ್ರಾಮೀಣ ಪ್ರದೇಶದ ಪ್ರಾಥಮಿಕ ತರಗತಿಗಳಲ್ಲಿ, ಹತ್ತರಲ್ಲಿ ಮೂರಕ್ಕಿಂತ ಹೆಚ್ಚಿನ ಮಕ್ಕಳು ಖಾಸಗಿ ಶಾಲೆಗಳಲ್ಲಿ ಓದುತ್ತಿದ್ದಾರೆ ಎಂದು. ಎಲ್ಲ ಮಕ್ಕಳಿಗೂ ಅವರ ಸಾಮಾಜಿಕ-ಆರ್ಥಿಕ ಹಿನ್ನೆಲೆಯನ್ನು ಲೆಕ್ಕಿಸದೆ ಖಾಸಗಿ ಶಾಲೆಗಳಲ್ಲಿ ಪ್ರವೇಶ ವಿಸ್ತರಿಸಬೇಕು ಎಂಬ ಕೂಗು ಹೆಚ್ಚುತ್ತಿದೆ. ಖಾಸಗಿ ಶಾಲೆಗಳ ಈ ಜನಪ್ರಿಯತೆ, ಸಮಾಜದಲ್ಲಿ ಆರ್ಥಿಕ ಹಾಗೂ ಸಾಮಾಜಿಕ ಶ್ರೇಣೀಕರಣದ ಬಗ್ಗೆ ಒಟ್ಟಾರೆಯಾಗಿ ಹಾಗೂ ನಿರ್ದಿಷ್ಟವಾಗಿ ಶಿಕ್ಷಣ ಕ್ಷೇತ್ರದ ಬಗ್ಗೆ ಕಳವಳಕ್ಕೆ ಕಾರಣವಾಗಿದೆ. ಸರ್ಕಾರಿ ಶಾಲೆಗಳಿಂದ ಅತೃಪ್ತರಾಗಿರುವ ಪೋಷಕರ ಕಾರಣದಿಂದ ಶುಲ್ಕ ವಿಧಿಸುವ ಖಾಸಗಿ ಶಾಲೆಗಳ ಈ ಜನಪ್ರಿಯತೆ ಹೆಚ್ಚಾಗುತ್ತಿದೆ ಎಂಬುದು ಹಲವರ ನಂಬಿಕೆ. ಖಾಸಗಿ ಶಾಲೆಗಳು ಉತ್ತಮ ಎಂಬ ಭಾವನೆ ಬೆಳೆದು ಬಿಟ್ಟಿದೆ. ಆದರೆ ಈ ಕಲ್ಪನೆ ಎಷ್ಟು ಸಮಂಜಸ ?

ಖಾಸಗೀ ಶಾಲೆಗಳ ಪ್ರತಿಪಾದಕರ ಮುಖ್ಯ ವಾದವೆಂದರೆ, ಅಲ್ಲಿ ಮಕ್ಕಳ ಕಲಿಕೆ ಉತ್ತಮವಾಗಿದೆ ಎಂಬುದು. ಪರೀಕ್ಷೆಗಳಲ್ಲಿ ಪಡೆದ ಹೆಚ್ಚಿನ ಅಂಕಿಗಳ ವಿಸ್ತೃತ ಪುರಾವೆಯನ್ನು ಇದಕ್ಕಾಗಿ ಅವರು ಒಡ್ಡುತ್ತಾರೆ. ಎರಡು ಬೇರೆ ಶಾಲೆಗಳಲ್ಲಿ ನಡೆವ ಪರೀಕ್ಷೆಯ ಫಲಿತಾಂಶಗಳನ್ನು , ಪರೀಕ್ಷೆಗಳು ಬೇರೆಯಾದ್ದರಿಂದ ಹೋಲಿಸಬಾರದು ಎಂಬ ವಾದವನ್ನು, ಒಂದೇ ಪ್ರಶ್ನೆಪತ್ರಿಕೆಗಳನ್ನುಪಯೋಗಿಸಿ ನಡೆಸಿದ ಪರೀಕ್ಷೆಗಳ ಫಲಿತಾಂಶಗಳನ್ನು ಮುಂದೊಡ್ಡಿ ಸೋಲಿಸುತ್ತಾರೆ - ಇಲ್ಲೂ ಖಾಸಗೀ ಶಾಲೆಗಳ ಮಕ್ಕಳು ಸರ್ಕಾರೀ ಶಾಲೆಗಳ ಮಕ್ಕಳಿಗಿಂತ ಉತ್ತಮ ಅಂಕಗಳನ್ನು ಪಡೆದಿರುತ್ತಾರೆ. ಇದು ಅವರ ‘ಬ್ರಹ್ಮಾಸ್ತ್ರ’.

ಈ ರೀತಿಯ ಚಿಂತನೆಯು ಬಹಳ ದೊಡ್ಡ ಮಿತಿಯನ್ನು ಹೊಂದಿದೆ. ಸರ್ಕಾರಿ ಶಾಲೆಯ ಮಕ್ಕಳಿಗೆ ಹೋಲಿಸಿದಾಗ ಖಾಸಗಿ ಶಾಲೆಯ ಮಕ್ಕಳು ವಿವಿಧ ಸಾಮಾಾಜಿಕ-ಆರ್ಥಿಕ ಹಿನ್ನೆಲೆಯಿಂದ ಬಂದಿರುತ್ತಾರೆ ಎಂಬುದು ಗಮನಾರ್ಹ. ಇದರಿಂದಾಗಿ

ಇಬ್ಬರ ನಡುವಿನ ತುಲನೆ ಅಸಮಾನವಾಗಿ ಕಾಣುತ್ತದೆ. ಸೇಬನ್ನು ಕಿತ್ತಳೆಗೆ ಹೋಲಿಸಿದಂತೆ. ನ್ಯಾಯವಾದ ತುಲನೆಗೆ, ಸಮಾನ ಹಿನ್ನೆಲೆಯುಳ್ಳ ಖಾಸಗಿ ಹಾಗೂ ಸರ್ಕಾರಿ ಶಾಲೆಗಳ ಮಕ್ಕಳ ನಡುವೆ ಏಕಕಾಲದಲ್ಲಿ ಸಮಾನ ಸಾಧನಗಳನ್ನು ಬಳಸಿ ನಡೆಸುವ ಮೌಲ್ಯಮಾಪನ ಸೂಕ್ತವೆಂದೆನಿಸುತ್ತದೆ.

ಈ ಅಗತ್ಯದ ಅರಿವಿನಿಂದ ಒಂದು ಕಠಿಣ ಯಾದೃಚ್ಛಿಕ ಮೌಲ್ಯಮಾಪನ ವಿನ್ಯಾಸವನ್ನು ಒಳಗೊಂಡಂತಹ, ಐದು ವರ್ಷದಷ್ಟು ದೀರ್ಘವಾದ Andhra Pradesh School Choice study (APSC) ಎಂಬ "ಅನುಲಂಬ ವರ್ಗೀಯ ಸಂಶೋಧನೆಗೆ" ಅಧ್ಯಯವನ್ನು ಆರಂಭಿಸಲಾಯಿತು. ಇದು ಭಾರತದಲ್ಲಷ್ಟೇ ಅಲ್ಲದೇ ಇಡೀ ವಿಶ್ವದಲ್ಲಿಯೇ ಇದೊಂದು ಅತಿ ದೊಡ್ಡದಾದ ಹಾಗೂ ಮಹತ್ವದ ಅಧ್ಯಯನ. ಮೊದಲ ಬಾರಿಗೆ, ಈ ಅಧ್ಯಯನವು ಸಮಾಜದಲ್ಲಿ ಸಾಮಾಜಿಕ ಹಾಗೂ ಆರ್ಥಿಕವಾಗಿ ದುರ್ಬಲ ವರ್ಗಗಳಿಂದ ಬಂದಂತಹ ಮಕ್ಕಳು ವಿದ್ಯಾರ್ಥಿವೇತನದ ಸಹಾಯದಿಂದ ಖಾಸಗಿ ಶಾಲೆಗಳಿಗೆ ಹೋಗುವ ಅವಕಾಶವನ್ನು ಪಡೆದಿರುವ ಹಾಗೂ ಅದರಿಂದಾಗುವ ಪರಿಣಾಮದ ಬಗ್ಗೆ ವಿಶ್ವಾಸಾರ್ಹ ಮಾಹಿತಿಯನ್ನು ಒದಗಿಸುತ್ತದೆ. ಭವಿಷ್ಯದಲ್ಲಿ ಭಾರತದಲ್ಲಿ ಶಿಕ್ಷಣದ ದಿಕ್ಕನ್ನು ನಿರ್ದೇಶಿಸುವ ದೃಷ್ಟಿಕೋನದಿಂದ ಈ ಅಧ್ಯಯನವು ಬಹಳ ನಿರ್ಣಾಯಕವಾಗಿರುತ್ತದೆ.

ಖಾಸಗಿ ಶಾಲೆಯಲ್ಲಿ ಓದಿದ ಈ 'ವಿದ್ಯಾರ್ಥಿವೇತನ ಪಡೆದ ಮಕ್ಕಳು' ಶೈಕ್ಷಣಿಕವಾಗಿ ಯಾವ ಲಾಭವನ್ನು ಪಡೆಯಲಿಲ್ಲವೆಂದು ಈ ಅಧ್ಯಯನ ಬಹಳ ಸ್ಪಷ್ಟವಾಗಿ ಹಾಗೂ ನಿರ್ಣಾಯಕವಾಗಿ ನಿರೂಪಿಸುತ್ತದೆ. ಐದು ವರ್ಷಗಳ ನಂತರವೂ ತೆಲುಗು, ಗಣಿತ, ಸಮಾಜ ಶಾಸ್ತ್ರ ಹಾಗೂ ಆಂಗ್ಲಭಾಷೆಯಲ್ಲಿ ಅವರ ಕಲಿಕಾ ಸಾಧನೆ ಸರ್ಕಾರಿ ಶಾಲೆಗಳಲ್ಲಿ ಓದುವ ಸರೀಕ ಮಕ್ಕಳಿಗಿಂತ ಬಹಳ ಉತ್ತಮವಾಗಿರಲಿಲ್ಲ. ಖಾಸಗಿ ಶಾಲೆಗಳ ಬಗ್ಗೆ ಇರುವ ಸಾಮಾನ್ಯ ಗ್ರಹಿಕೆಗೆ ಇದು ಸ್ಪಷ್ಟವಾಗಿ ವಿರುದ್ಧವಾಗಿದೆ. ಕುತೂಹಲಕರವಾಗಿ, 'ವಿದ್ಯಾರ್ಥಿವೇತನ ಪಡೆದ ಮಕ್ಕಳ' ಪೋಷಕರು ಖಾಸಗಿ ಶಾಲೆಗಳಿಂದ ಬಹಳ ಸಂತುಷ್ಟರಾಗಿದ್ದೇವೆ ಎಂದು ಸಾಧಿಸುತ್ತಾರೆ. ಈ ವಿಭಜನೆಯ ಕಾರಣವೇನು? ಪೋಷಕರು ತಮ್ಮ ಮಕ್ಕಳನ್ನು ಖಾಸಗಿ ಶಾಲೆಗೆ ಏಕೆ ಕಳಿಸುತ್ತಿದ್ದಾರೆ?

ಅಧ್ಯಯನದ ಸಮಯದಲ್ಲಿ ಕಲೆಹಾಕಿದ ಮಾಹಿತಿಯು ಕೆಲವು ಸೂಚ್ಯ ಉತ್ತರಗಳನ್ನು ಕೊಡುತ್ತದೆ. ಮಕ್ಕಳು ಚೆಂದವಾಗಿರುವುದು, ಶಿಕ್ಷಕರು ಮಕ್ಕಳಿಗೆ ನೀಡುವ ಮನೆಗೆಲಸ, ಆಂಗ್ಲ ಮಾಧ್ಯಮದಲ್ಲಿ ಬೋಧನೆ, ಸಮಾಜದ ಕಣ್ಣಲ್ಲಿ

ಸ್ಥಾನಮಾನದ ಏರಿಕೆಯ ಭಾವ ಹಾಗೂ ಇನ್ನಿತರ ಅಸ್ಪಷ್ಟ ಅಂಶಗಳಿಂದ ಪ್ರಭಾವಿತರಾದಂತೆ ಕಾಣುತ್ತದೆ. ಸ್ಪಷ್ಟವಾಗಿ, ಇಲ್ಲಿ ಕಲಿಕಾ ಸಾಧನೆಯೊಂದನ್ನು ಹೊರತುಪಡಿಸಿ ಬೇರೆ ಅಂಶಗಳೇ ಮುನ್ನೆಲೆಗೆ ಬಂದಿವೆ.. ಅಷ್ಟೇ ಅಲ್ಲದೇ, ಖಾಸಗಿ ಶಾಲೆಗಳು ಹೆಚ್ಚಿನ ಲಾಭವನ್ನೂ ಇದರಿಂದ ಪಡೆಯುತ್ತಿರುವಂತಿದೆ. ಹೀಗೇಕೆ ಆಗುತ್ತಿದೆ? ಶಾಲೆಯ ಹೊರಗೆ ಈ ಎರಡನೆಯ ವಿಭಜನೆಗೆ ಕಾರಣಗಳನ್ನು ಕಾಣಬಹುದು - ಉತ್ತಮ ಶಿಕ್ಷಣ ಪಡೆದಿರುವ ಪೋಷಕರು, ಉತ್ತಮ ಶೈಕ್ಷಣಿಕ ವಾತಾವರಣ ಹಾಗೂ ಮನೆಗಳಲ್ಲಿ ದೊರಕುವ ಬೆಂಬಲ, ಖಾಸಗಿ ಮನೆಪಾಠ ಕೈಗೆಟುಕುವಂತಿರುವುದು ಹಾಗೂ ಮನೆಗಳಲ್ಲಿ ಮಕ್ಕಳ ಮೇಲೆ ಕಡಿಮೆ ಜವಾಬ್ದಾರಿಗಳ ಹೊರೆ .

ಈ ಅಧ್ಯಯನ ಇನ್ನಷ್ಟು ಕುತೂಹಲಕಾರಿ ಪ್ರಶ್ನೆಯನ್ನು ಮುಂದಿಡುತ್ತದೆ - ಅಧ್ಯಯನದ ಫಲಿತಾಂಶಗಳು ಸತ್ಯವಾಗಿದ್ದರೂ ಅದು ಆಂಧ್ರಪ್ರದೇಶಕ್ಕೆ ಮಾತ್ರ ಸಂಬಂಧಿಸಿದ್ದಾಗಿದೆ. ಭಾರತದ ಇತರ ರಾಜ್ಯಗಳಿಗೂ ಈ ಫಲಿತಾಂಶವನ್ನು ಅನ್ವಯಿಸಬಹುದೆ ? ನಿಜವಾಗಿಯೂ, ಇದು ಅತ್ಯಂತ ಸರಿಯಾದ ( ಹಾಗೂ ಮುಖ್ಯವಾದ ) ಪ್ರಶ್ನೆ. ನಮ್ಮ ದೇಶದ ಯಾವುದೇ ಭಾಗದಲ್ಲಿ ಇಂತಹ ತುಲನಾತ್ಮಕ, ಕಠಿಣವಾದ ಹಾಗೂ ದೊಡ್ಡ ಮಟ್ಟದಲ್ಲಿ ನಡೆದ ಅಧ್ಯಯನ ಮತ್ತೊಂದಿಲ್ಲ. ಅದಾಗ್ಯೂ, ಬೇರೆ ರಾಜ್ಯಗಳಲ್ಲಿ ಕೆಲವು ಇತರ ಸಂಶೋಧನೆಗಳು ( ಅನಂತರದಲ್ಲಿ ದೊರಕಿದ ಮಾಹಿತಿಯ ವಿಶ್ಲೇಷಣೆಯನ್ನು ಆಧರಿಸಿ ) ಇಂತಹುದೇ ಫಲಿತಾಂಶವನ್ನು ಸೂಚಿಸುತ್ತದೆ. ಇವುಗಳಲ್ಲಿ ಕೆಲವನ್ನು APSC ಅಧ್ಯಯನದ ಕೆಲವು ಲೇಖನಗಳಲ್ಲಿ ಉಲ್ಲೇಖಿಸಲಾಗಿದೆ. ಇತ್ತೀಚಿನ ASER (ಗ್ರಾಮೀಣ ) 2014 [2] ನಲ್ಲಿನ ವಿಶ್ಲೇಷಣಾ ಲೇಖನವು ಹೇಳುವುದೇನೆಂದರೆ, ಯಾವ ಬಗೆಯ ಶಾಲೆ ಎಂಬ ಅಂಶವೊಂದನ್ನು ಹೊರತುಪಡಿಸಿದರೆ, ಕಲಿಕಾ ಫಲಿತಾಂಶದಲ್ಲಿ ಖಾಸಗಿ ಹಾಗೂ ಸರ್ಕಾರಿ ಶಾಲೆಗಳ ಮಕ್ಕಳಲ್ಲಿ ಮಿಕ್ಕೆಲ್ಲ ಅಂಶಗಳಲ್ಲಿ ಬಹಳ ಕಡಿಮೆ ವ್ಯತ್ಯಾಸವಿದೆ. ಲೇಖನದ ಕರ್ತೃ ಇನ್ನೂ ಮುಂದುವರಿದು ಹೇಳುವುದೇನೆಂದರೆ, ವಾಸ್ತವದಲ್ಲಿ ಕೆಲವು ರಾಜ್ಯಗಳಲ್ಲಿ ಸರ್ಕಾರಿ ಶಾಲೆಯ ಮಕ್ಕಳು ಉತ್ತಮವಾಗಿದ್ದಾರೆ. ಒಟ್ಟಾಗಿ ಹೇಳಬಹುದಾದರೆ, ಗ್ರಾಮೀಣ ಪ್ರದೇಶಗಳಲ್ಲಿ ಕಲಿಕಾ ಫಲಿತಾಂಶಕ್ಕೆ ಸಂಬಂಧಿಸಿದಂತೆ ಖಾಸಗಿ ಶಾಲೆಗಳು ಸರ್ಕಾರೀ ಶಾಲೆಗಳಿಗಿಂತ ಉತ್ತಮವಾಗಿ ಇಲ್ಲ ಎನ್ನುವ ಸಂಶೋಧನೆಯನ್ನು ಸಾಮಾನ್ಯವಾಗಿ ದೇಶದ ಇತರೆಡೆಯೂ ಅನ್ವಯಿಸಬಹುದು.

## ನಗರ ಶಾಲೆಗಳು

ಈಗ ನಗರ ಪ್ರದೇಶಗಳಲ್ಲಿ ಅದರಲ್ಲಿಯೂ ನಿರ್ದಿಷ್ಟವಾಗಿ 'ಗಣ್ಯ ಶಾಲೆಗಳ'ತ್ತ ನೋಟ ಹರಿಸೋಣ. ೨೦೦೬ರಲ್ಲಿ ದೇಶದ

ಮಹಾನಗರಗಳಲ್ಲಿ ಇರುವ ಕೆಲವು ಉನ್ನತ ಖಾಸಗಿ ಶಾಲೆಗಳಲ್ಲಿ Wipro and Educational Initiatives ಅವರು 'Quality Education Study' ಎಂಬ ಕುತೂಹಲಕಾರಿ ಅಧ್ಯಯನ ನಡೆಸಿದರು. ದೇಶದಲ್ಲಿಯೇ ಅತ್ಯಂತ ಉತ್ತಮ ಎಂದು ಪರಿಗಣಿಸಲ್ಪಟ್ಟ ಶಾಲೆಗಳು ಕೂಡ ಸಾಧಿಸಲು ಸಾಕಷ್ಟು ಉಳಿಸಿವೆ ಎಂಬ ಬಹಳ ಸ್ಪಷ್ಟ ಫಲಿತಾಂಶವನ್ನು ಈ ಅಧ್ಯಯನ ಸೂಚಿಸಿತು. ಜಾಗತಿಕ ಮಟ್ಟಕ್ಕೆ ಹೋಲಿಸಿದರೆ ಅಲ್ಲಿನ ವಿದ್ಯಾರ್ಥಿಗಳ ಸಾಧನೆ ಕೆಳಮಟ್ಟದ್ದು. ಅರ್ಥಗ್ರಹಿಕೆ, ವಿಷಯ ಸ್ಪಷ್ಟತೆ ಹಾಗೂ ಚಿಂತನೆ ಮತ್ತು ಬಳಕೆ ಇಂತಹ ವಿಷಯಗಳು ಬಂದಾಗ ಕಳಪೆ ಸಾಧನೆಯಿದ್ದು ಕೇವಲ ಗಟ್ಟು ಮಾಡುವಲ್ಲಿ ಮತ್ತು ನಿಗದಿತ ಕ್ರಮದ ಕೆಲಸಗಳಲ್ಲಿ ಮಾತ್ರ ಚೆನ್ನಾಗಿ ಮಾಡುತ್ತಾರೆಂಬಂತೆ ತೋರುತ್ತದೆ . ಪಟ್ಟಣದ ಪ್ರತಿಷ್ಠಿತ ಶಾಲೆಗಳಲ್ಲೇ ಪರಿಸ್ಥಿತಿ ಹೀಗಿದ್ದರೆ, ಉಳಿದ ಖಾಸಗೀ ಶಾಲೆಗಳ ವಿದ್ಯಾರ್ಥಿಗಳ ಸ್ಥಿತಿಯನ್ನು ಊಹಿಸಿಕೊಳ್ಳಿ.

ಅಂತರರಾಷ್ಟ್ರೀಯ ಮಟ್ಟದಲ್ಲಿ ದೊರೆತ ಇತರ ಅಂಶಗಳು ದೇಶದ ನಿರಾಶಾದಾಯಕ ಶಿಕ್ಷಣದ ಬಗ್ಗೆ ಖಚಿತಪಡಿಸುತ್ತಿದೆ. ಬಹಳ ಒತ್ತಾಯದ ನಂತರ ಮೊದಲ ಬಾರಿಗೆ ತಮಿಳುನಾಡು ಹಾಗೂ ಹಿಮಾಚಲ ಪ್ರದೇಶ PISA 2009+ ಮೌಲ್ಯಮಾಪನದಲ್ಲಿ ಪಾಲ್ಗೊಂಡವು. ಅದರಲ್ಲಿ ದೊರಕಿದ ಫಲಿತಾಂಶದ ಪ್ರಕಾರ[4] ನಾವು ಹದಿನೈದು ವರ್ಷ ವಯಸ್ಸಿನ ಮಕ್ಕಳ ಕಲಿಕಾ ಸಾಧನೆಯಲ್ಲಿ (ಗ್ರಾಮೀಣ ಹಾಗೂ ನಗರ ಪ್ರದೇಶಗಳಿಂದ ಯಾದೃಚ್ಛಿಕವಾಗಿ ಆಯ್ಕೆ ಮಾಡಿದ), 74 ರಾಷ್ಟ್ರಗಳಲ್ಲಿ ಕೊನೆಯಿಂದ ಎರಡನೆಯವರಾಗಿ ಕಿರ್ಗಿಸ್ತಾನದ ಮುಂಚಿನ ಸ್ಥಾನದಲ್ಲಿ ಇದ್ದೇವೆ ಎಂದು ತೋರಿಸುತ್ತದೆ. ಆನಂತರ ಭಾರತ PISAದಲ್ಲಿ ಭಾಗವಹಿಸಿಲ್ಲ. PISA ಮೌಲ್ಯಮಾಪನದ ಸಾಧನಗಳು ಹಾಗೂ ಪ್ರಕ್ರಿಯೆಯನ್ನು ಕೆಲವರು ಒಪ್ಪುವುದಿಲ್ಲವಾದರೂ, ಇದು ಬೇರೆಯದೇ ಕಥೆಯನ್ನು ಹೇಳುತ್ತದೆ.

**ಸ್ಪರ್ಧೆಯು ಉಪಯುಕ್ತವೇ ?**

ಖಾಸಗಿ ಶಾಲೆಯ ಕೆಲವು ಬೆಂಬಲಿಗರ ವಾದ ' ಸ್ಪರ್ಧೆಯ ಸಿದ್ಧಾಂತ' ವನ್ನು ಆಧರಿಸಿದೆ. ಖಾಸಗಿ ಶಾಲೆಗಳ ಹೆಚ್ಚಳದಿಂದ ಹೆಚ್ಚಿನ ಸ್ಪರ್ಧೆ ಏರ್ಪಟ್ಟು , ಅದು ಎಲ್ಲ ಶಾಲೆಗಳ ಗುಣಮಟ್ಟದಲ್ಲಿ ಒಟ್ಟಾರೆ ಸುಧಾರಣೆಗೆ ಕಾರಣವಾಗುತ್ತದೆ, ಸರ್ಕಾರಿ ಶಾಲೆಗಳೂ ಸೇರಿದಂತೆ ಎಂದು ಸಾಧಿಸುತ್ತಾರೆ. ಬ್ಯಾಂಕಿಂಗ್,ವಾಯುಯಾನ ಹಾಗೂ ಮೊಬೈಲ್ ದೂರಸಂಪರ್ಕ ಕ್ಷೇತ್ರಗಳನ್ನು ಈ ಚಿಂತನೆಗೆ ಅನುಗುಣವಾದ ಉದಾಹರಣೆಗಳೆಂದು ಪುರಾವೆ ಒದಗಿಸುತ್ತಾರೆ. ಈ ಉದಾಹರಣೆಯಾದರೋ ಒಂದೇ ಆಯಾಮದ ಆರ್ಥಿಕ ದೃಷ್ಟಿಕೋನ - ಸಾಮಾಜಿಕ ಉದ್ದೇಶವನ್ನು ವ್ಯಾಪಾರೀ ಲಾಭಗಳೊಂದಿಗೆ ತಳಕು ಹಾಕುವುದು.

ಎರಡನ್ನೂ ಒಂದಕ್ಕೊಂದು ಹೋಲಿಸಲಾಗದು. ದುರದೃಷ್ಟವೆಂದರೆ ‘ಶಿಕ್ಷಣ ಚೀಟಿ’ಗಾಗಿ (ಅಥವಾ ಶಾಲೆಯ ಆಯ್ಕೆ ಎಂದೂ ಕರೆಯಬಹುದು ) ವಕಾಲತ್ತು ವಹಿಸುವವರು ಇದನ್ನು ಪ್ರಬಲ ಅಸ್ತ್ರವಾಗು ಬಳಸುತ್ತಿರುವುದು.

ಆದರೆ ವಾಸ್ತವವಾಗಿ, ಶಿಕ್ಷಣದಲ್ಲಿ ಸ್ಪರ್ಧೆ ಹಾನಿಕಾರಕವಾಗಬಹುದು ಎಂದು ಸ್ಪಷ್ಟವಾಗಿ ಗೋಚರಿಸುವ ಬಹಳಷ್ಟು ರುಜುವಾತುಗಳಿವೆ. ಆಗಸ್ಟ್ ೨೦೧೪ ರಲ್ಲಿ PISA Infocus 42 [5] ನಡೆಸಿದ ಒಂದು ವಿಶ್ಲೇಷಣಾತ್ಮಕ ವಿಶ್ಲೇಷಣೆಯ ಆಧಾರದ ವರದಿ ಸೂಚಿಸುವುದೇನೆಂದರೆ, ಶಾಲೆಯ ಆಯ್ಕೆ ಹೆಚ್ಚಿನ ಪ್ರತ್ಯೇಕತೆಗೆ ಕಾರಣವಾಗಿ ಅದರಿಂದ ಕಲಿಕಾ ಫಲಿತಾಂಶವು ಹಾನಿಗೊಳಗಾಗುವುದು. ಹಲವು ಜನರಿಗೆ ಆಶ್ಚರ್ಯ ಮೂಡಿಸುವಂತಹ ಸಂಗತಿಯೆಂದರೆ, ಸತತವಾಗಿ ಬಹಳ ವರ್ಷಗಳಿಂದ ಶಿಕ್ಷಣ ಗುಣಮಟ್ಟದಲ್ಲಿ ಮುಂಚೂಣಿಯಲ್ಲಿರುವಂತಹ ಫಿನ್ಲೆಂಡ್ ನಂತಹ ದೇಶದ ಶಾಲೆಗಳಲ್ಲಿ ‘ಮಾನದಂಡದ ಮೌಲ್ಯಮಾಪನ’ ಇಲ್ಲದೆ ಇರುವುದು. ಬದಲಿಗೆ ಅವರ ಗಮನವೆಲ್ಲ ಒಳಗೊಳ್ಳುವಿಕೆ ಹಾಗೂ ಸಮಾನತೆ ಎಂಬುದರ ಮೇಲೆ ಕೇಂದ್ರೀಕೃತವಾಗಿದೆ. ಸ್ಪಷ್ಟವಾಗಿ ಹೇಳಬೇಕಂದರೆ ಭಾರತದಲ್ಲಿರುವ ಶಾಲೆಗಳು ಇನ್ನೂ ಬಹಳಷ್ಟು ಕಲಿಯಬೇಕಾಗಿದೆ, ಸರ್ಕಾರಿ ಹಾಗೂ ಖಾಸಗಿ ಎರಡೂ ಕ್ಷೇತ್ರಗಳಲ್ಲಿ .

## ಸಮಾರೋಪ

ಕೊನೆಯಲ್ಲಿ ಹೇಳುವುದಾದರೆ, ಈ ಲೇಖನದ ಉದ್ದೇಶ ಖಾಸಗಿ ಶಾಲೆಗಳು ಉಪಯೋಗವೇ ಇಲ್ಲದ್ದು ಎಂದು ಹೇಳಬಯಸುವುದಲ್ಲ. ಸರ್ಕಾರಿ ಶಾಲೆಗಳಲ್ಲೂ ಅದರದೇ ಆದ ತೊಂದರೆಗಳು ಹಾಗೂ ನ್ಯೂನತೆಗಳಿವೆ. ಶಿಕ್ಷಣದ ಗುಣಮಟ್ಟದ ಬಗ್ಗೆ ದೇಶದಲ್ಲಿ ನಡೆಯುತ್ತಿರುವ ವಾದಕ್ಕೆ ಪೂರಕವಾಗಿ ಒಂದು ವಿಸ್ತೃತ ದೃಷ್ಟಿಕೋನವನ್ನು ನೀಡುವ ಉದ್ದೇಶವಷ್ಟೇ. ಖಾಸಗಿ ಶಾಲೆಗಳು ಒಳ್ಳೆಯ ಗುಣಮಟ್ಟದ ಶಿಕ್ಷಣವನ್ನು ಒದಗಿಸುತ್ತದೆ ಎಂದು ಕುರುಡಾಗಿ ಭಾವಿಸುವುದು ತಪ್ಪೆಂದು ಕಾಣುತ್ತದೆ. ಇತ್ತೀಚೆಗೆ, ಅಂತರಾಷ್ಟ್ರೀಯ ಮಟ್ಟದಲ್ಲಿ ನಡೆದ ಬಹಳಷ್ಟು ಅಧ್ಯಯನಗಳು ಖಾಸಗಿ ಶಾಲೆಗಳು ಸರ್ಕಾರಿ ಶಾಲೆಗಳಿಗಿಂತ ಯಾವುದೇ ರೀತಿಯಲ್ಲಿ ಉತ್ತಮವಾಗಿಲ್ಲ ಎನ್ನುವುದನ್ನು ಸೂಚಿಸುತ್ತಿವೆ. ಖಚಿತವಾಗಿ ಹೇಳುವುದಾದರೆ, ಭಾರತದಲ್ಲಿರುವ ಬಹಳಷ್ಟು ಶಾಲೆಗಳು ( ಸರ್ಕಾರಿ ಹಾಗೂ ಖಾಸಗಿ ಶಾಲೆಗಳು ಎರಡೂ ) ಸರ್ವತೋಮುಖ ಉತ್ತಮ ಗುಣಮಟ್ಟದ ಶಿಕ್ಷಣವನ್ನು ತಮ್ಮ ವಿದ್ಯಾರ್ಥಿಗಳಿಗೆ ನೀಡುತ್ತಿವೆ. ಇಷ್ಟಾದರೂ, ಇವುಗಳ ಸಂಖ್ಯೆ

ಬೆರಳೆಣಿಕೆಯಷ್ಟೇ. ಎಲ್ಲಾ ಶಾಲೆಗಳಲ್ಲಿನ ಗುಣಮಟ್ಟವನ್ನು ಹೆಚ್ಚಿಸುವುದರ ಕಡೆಗೆ ನಮ್ಮ ಪ್ರಯತ್ನವಿರಬೇಕು. ಭಾರತದ ಶಾಲಾ ಗುಣಮಟ್ಟದಲ್ಲಿ ಅಳವಡಿಸಿಕೊಂಡಿರುವ ಉತ್ತಮ ಪದ್ಧತಿಗಳನ್ನು ಉದಾಹರಣೆಯ ರೂಪದಲ್ಲಿ ವ್ಯಾಪಕವಾಗಿ ಅಳವಡಿಸಿಕೊಳ್ಳುವುದು ಹಾಗೂ ಫಿನ್ಲೆಂಡ್ ನಂತಹ ದೇಶಗಳಿಂದ ವ್ಯವಸ್ಥಿತ ಹಾಗೂ ಕಾರ್ಯನೀತಿ ಮಟ್ಟದಲ್ಲಿ ಕಲಿಯುವಿಕೆಯೇ ಈಗ ನಮ್ಮ ಮುಂದಿರುವ ಮಾರ್ಗ.

**References**


1. 'Does school choice help rural children from disadvantaged sections? Evidence from longitudinal research from Andhra Pradesh', D D Karopady, Economic and Political Weekly, December 2014, Mumbai, India
2. 'Government vs private schools: Have things changed', Willima Wadhwa, ASER (Rural) 2014, ASER Center, New Delhi
3. 'Wipro-EI Quality Education Study, 2011', accessed online at http://www.wiproapplyingthoughtinschools.com/sites/default/files/Wipro%20-%20EI%20Quality%20Education%20Study%20-%20Executive_Summary.pdf
4. Results of PISA 2009+ released by ACER, December 2011 accessed online at http://www.acer.edu.au/media/article/acer-releases-results-of-pisa-2009-participant-economies
5. PISA in Focus 42, Organisation for Economic Cooperation and Development, August 2014 accessed online at http://www.oecd.org/pisa/pisaproducts/ pisainfocus/ PISA-in-Focus-N42-(eng)-FINAL.pdf
6. 'Education System', Finnish National Board of Education, accessed on line at http://www.oph.fi/english/education_system